CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೦೫ (ಫಾಲ್ಗುಣ ೧೨, ಶಕ ವರ್ಷ ೧೯೨೬) | ಸಂಚಿಕೆ ೯ |
|---|---|---|

## ಭಾಗ - ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು.

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಆಸುಇ 34 ಆಸೇನಿ 95 ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2005**

ಅಧಿಸೂಚನೆ ಸಂಖ್ಯೆ: ಸಿಆಸುಇ 321 ಆಸೇಇ 94 ದಿನಾಂಕ: 29.09.2004 ರನ್ವಯ ದಿನಾಂಕ: 31.10.95 ರಂದು 58 ವರ್ಷಗಳ ವಯೋಮಿತಿ ತಲುಪಿ ನಿವೃತ್ತಿ ಹೊಂದಿರುವ ಶ್ರೀ ಇ. ಕೃಷ್ಣನಾರಾಯಣ, ನಿರ್ದೇಶಕರು, ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಇವರಿಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 15 ಎಸ್‌ಆರ್‌ಎಸ್ 97 ದಿನಾಂಕ: 20.09.1997 ರನ್ವಯ ನಿವೃತ್ತಿ ದಿನಾಂಕದವರೆಗೆ ಅವರ ಹಕ್ಕಿನಲ್ಲಿರುವ ಗಳಿಕೆ ರಜೆಯನ್ನು 240 ದಿನಗಳ ಗರಿಷ್ಠ ಮಿತಿಗೊಳಪಟ್ಟು ಕರ್ನಾಟಕ ನಾಗರೀಕ ಸೇವಾ ನಿಯಮ 118-ಎ (1)ರಡಿ ಹಾಗೂ ಉಪನಿಯಮ (2)ರ ವ್ಯಾಪ್ತಿಗೊಳಪಟ್ಟು ನಗದೀಕರಣಗೊಳಿಸಲು ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.204

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ 378 ಸಆಸೇ 2004 ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2005**

ಶ್ರೀ ಕೆ. ಎನ್. ವಿಜಯ, ವ್ಯವಸ್ಥಾಪಕರು (ಆ ಮತ್ತು ಯೋ) ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಪ್ರಧಾನ ಕಛೇರಿ ಬೆಂಗಳೂರು ಇವರನ್ನು ದಿನಾಂಕ: 15.12.2004 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಸಮಾಜ ಕಲ್ಯಾಣ ಸಚಿವರ ಪದಾವಧಿಯವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 15 (1) (3) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ.

ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.205

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ, (ಸೇವೆಗಳು-2).

### HIGH COURT OF KARNATAKA
### NOTIFICATION

**GOB. II 137/86 Bangalore, Dated: 20th January 2005**

The Civil Judge (Sr. Dn), Gokak is directed to itinerate to Raibag, for last 10 days of each month, to dispose off the cases arising out of Raibag Taluk, with immediate effect, until further orders.

By Order of the High Court,

PR-207

**N. ANANDA**

Registrar General.

**PERSONNEL AND ADMINISTRATIVE REFORMS SECRETARIAT**

**NOTIFICATION No. DPAR 152 SFP 2004, Bangalore, Dated: 2nd February 2005**

Sri Harikumar Jha, IFS (KN-87), Deputy Conservator of Forests, waiting for posting, is posted with immediate effect and until further orders as Silviculturist, South Zone, Madikeri, in the existing vacancy.

Sri Brijesh Kumar IFS (KN-92), Deputy Conservator of Forests, under orders of transfer as Deputy Conservator of Forests, Belgaum Division, Belgaum is transferred and posted with immediate effect and until further orders as Deputy Conservator of Forests, Bagalkote Division; Bagalkote in the existing vacancy.

The notification No. DPAR 152 SFP 2004, dated: 1.1.2005 posting Sri Brijesh Kumar, IFS as Deputy Conservator of Forests, Belgaum Division, Belgaum, stands cancelled.

Sri Ashok B. Basarkod, IFS (KN-95), Deputy Conservator of Forests under orders of transfer as Deputy Conservator of Forests, Gadag Division, Gadag is continued until further orders as Deputy Conservator of Forests, Belgaum Division, Belgaum.

The notification No. DPAR 152 SFP 2004, dated:3.1.2005 posting Sri Ashok. B. Basarkod, IFS as Deputy Conservator of Forests, Gadag Division, Gadag, stands cancelled.

Sri K. D. Udapudi, IFS, Deputy Conservator of Forests, under orders of transfer as Deputy Conservator of Forests Bagalkote Division, Bagalkote is transferred and posted with immediate effect and until further orders as Deputy Conservator of Forests, Gadag Division, Gadag, in the existing vacancy.

The notification No. DPAR 152 SFP 2004, dated 1.1.2005 posting Sri K.D. Udapudi, IFS as Deputy Conservator of Forests, Bagalkote Division, Bagalkote, stands cancelled.

By Order and in the Name of the Governor of Karnataka,

**K. SUDHAKARA SHETTY**

PR-208 Under Secretary to Government, DPAR (Services-1).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ 90 ಇಅತ 2004 ಬೆಂಗಳೂರು, ದಿನಾಂಕ: 31ನೇ ಜನವರಿ 2005**

ಶ್ರೀ ಜಿ. ಎಂ. ಸರ್ವೇಶ್ವರ್ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ/ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯಲ್ಲಿ ಖಾಲಿ ಇರುವ ಬೋಧಕರು (ಮಹಿಳಾ ಅಧ್ಯಯನ) ಹುದ್ದೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ 3 ವರ್ಷಗಳ ಅವಧಿಗೆ ನಿಯೋಜನೆ ಮೇರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೆ. ಅನಸೂಯ**

ಪಿ.ಆರ್.185 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ, (ತರಬೇತಿ).

**HIGH COURT OF KARNATAKA**

**NOTIFICATION GOB. (I) 16(156)/2003 Bangalore, Dated: 4th February 2005**

Sri Shantaveer Shivappa, Civil Judge (Jr.Dn) and JMFC-II Court, Karwar is permitted to surrender 30 days of Earned leave from 1.9.04 to 30.09.04 (bdi) for the block period of 2003-04.

The officer shall be paid pay and allowances admissible for the period of leave so surrendered at the rate of 1/30th of the monthly pay and allowances for each day of leave surrendered as per the provisions contained in Rule 118(2) of K.C.S.Rs.

By Order of the High Court,

PR-209 **R. RANGASWAMY**

Assistant Registrar.

**HIGH COURT OF KARNATAKA**

**NOTIFICATION GOB. (I)1/2005 Bangalore, Dated: 5th February 2005**

The Presiding Officers of the Courts mentioned in Column No. 2 below, are concurrently appointed as the Presiding Officers of the Courts mentioned against them in Column No. 3, with immediate effect and until further orders.

| Sl.No. | Designation of the Presiding Officer | Name of the Court to which concurrently appointed |
|---|---|---|
| 1 | 2 | 3 |
| 1. | VIII Addl. City Civil And Sessions Judge, Bangalore City. | XVII Addl. City Civil and Sessions Judge, Bangalore City. |
| 2. | IX Addl. City Civil And Sessions Judge, Bangalore City | XXIX Addl. City Civil and Sessions Judge, Bangalore City. |

By Order of the High Court,

PR-210 **N. ANANDA**

Registrar General.

**HIGH COURT OF KARNATAKA**
**NOTIFICATION**
**GOB. (I)3/2005 Bangalore, Dated: 4th February 2005**

The Presiding Officer of the Court of Prl. Civil Judge (Jr.Dn.) and JMFC., Bagalkot, is concurrently appointed as the Presiding Officer of the Court of Civil Judge (Jr.Dn.) and JMFC., Badami (Vacant Court), with immediate effect and until further orders.

By Order of the High Court,
PR-211 **N. ANANDA**
Registrar General.

**HIGH COURT OF KARNATAKA**
**NOTIFICATION**
**GOB. (I)349/2004 Bangalore, Dated: 7th February 2005**

In exercise of powers conferred under Section 12(2) of the Code of Criminal Procedure, the Civil Judge (Jr.Dn) and JMFC-II Court, Karwar is hereby appointed as the Addl. Chief Judicial Magistrate for Uttara Kannada District from after office hours on 28.1.2005 till before office hours on 31.1.2005 during the absence of the Chief Judicial Magistrate of Uttara Kannada District.

By Order of the High Court,
PR-212 **R. B. BUDIHAL**
Registrar (Judicial).

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಮಮಇ:453:ಎಸ್‌ಜೆಡಿ:2004 ಬೆಂಗಳೂರು, ದಿನಾಂಕ: 27ನೇ ಜನವರಿ 2005**

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ನಗರಾಭಿವೃದ್ಧಿ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗಳಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಈ ಕೆಳಕಂಡ ಪರಿವೀಕ್ಷಣಾಧಿಕಾರಿ ದರ್ಜೆ-Iರ ಅಧಿಕಾರಿಗಳ ಸೇವೆಯನ್ನು ಕೂಡಲೇ ಹಿಂದಕ್ಕೆ ತೆಗೆದುಕೊಂಡು ವೇತನ ಶ್ರೇಣಿ ರೂ. 7400-200-8800-260-10880-320-13120ರ ಉನ್ನತೀಕರಿಸಲಾದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ/ ಸಹಾಯಕ ನಿರ್ದೇಶಕರ/ನಿರೂಪಣಾಧಿಕಾರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸಲು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರ ಅಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಇರಿಸಿ, ಇವರ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು ಹಾಗೂ ಕಾರ್ಯನಿರ್ವಹಿಸುತ್ತಿರುವ ಸ್ಥಳ ಶ್ರೀಮತಿ/ಶ್ರೀಯುತ | ಪದೋನ್ನತಿ ನಂತರ ಸ್ಥಳ ನಿಯುಕ್ತಿಗೊಳಿಸಬೇಕಾದ ಹುದ್ದೆ |
|---|---|---|
| 1. | ಶ್ರೀಮತಿ ಎಂ. ಸಿ. ಶೈಲಜಾ (ನಿಯೋಜನೆಯ ಮೇರೆಗೆ) ಬೋಧಕರು, (ದ್ವಾಕ್ರಾ) ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು | ಇವರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಮೈಸೂರು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀಮತಿ ಕೆ. ರಾಧ ನಿರೂಪಣಾಧಿಕಾರಿರವರ ಸ್ಥಾನದಲ್ಲಿ ಒಂದು ದಿನದ ಮಟ್ಟಿಗೆ ಕಾರ್ಯನಿರ್ವಹಿಸಿ, ಮರುದಿನ ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಮೈಸೂರು ಇಲ್ಲಿ ಬೋಧಕರು (ದ್ವಾಕ್ರಾ) ಹುದ್ದೆಗೆ ನೇಮಕಾತಿ ಆದೇಶ ಪಡೆಯಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಹಾಜರಾಗಲು ಆದೇಶಿಸಿದೆ. |
| 2. | ಶ್ರೀಮತಿ ಸಲ್ಮಾ ಸಾದಿಕಾ (ನಿಯೋಜನೆಯ ಮೇರೆಗೆ) ಸಾಮಾಜಿಕ ಅಭಿವೃದ್ಧಿ ತಜ್ಞೆ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು. | ಇವರು ಖಾಲಿ ಇರುವ ಸಹಾಯಕ ನಿರ್ದೇಶಕರು (ಮಕ್ಕಳ ಕಲ್ಯಾಣ) ಪ್ರಧಾನ ಕಛೇರಿ, ಬೆಂಗಳೂರು ಇಲ್ಲಿ ಒಂದು ದಿನದ ಮಟ್ಟಿಗೆ ಕಾರ್ಯನಿರ್ವಹಿಸಿ, ಮರುದಿನ ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಬೆಂಗಳೂರು ಇಲ್ಲಿ ಸಾಮಾಜಿಕ ಅಭಿವೃದ್ಧಿ ತಜ್ಞೆ ಹುದ್ದೆಗೆ ನೇಮಕಾತಿ ಆದೇಶಪಡೆಯಲು ನಗರಾಭಿವೃದ್ಧಿ ಇಲಾಖೆಯಲ್ಲಿ ಹಾಜರಾಗಲು ಆದೇಶಿಸಿದೆ. |
| 3. | ಶ್ರೀ ಜಿ. ಎಂ. ಸರ್ವೇಶ್ವರ್, (ನಿಯೋಜನೆಯ ಮೇರೆಗೆ) ಬೋಧಕರು, (ಮಹಿಳಾ ಅಧ್ಯಯನ) ಆಡಳಿತ ತರಬೇತಿ ಸಂಸ್ಥೆ, ಮೈಸೂರು. | ಇವರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಮೈಸೂರು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಅಯೂಬ್ ಷರೀಫ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಇವರ ಸ್ಥಾನದಲ್ಲಿ ಒಂದು ದಿನದ ಮಟ್ಟಿಗೆ ಕಾರ್ಯನಿರ್ವಹಿಸಿ, ಮರುದಿನ ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇಲ್ಲಿನ ಬೋಧಕರ (ಮಹಿಳಾ ಅಧ್ಯಯನ) ಹುದ್ದೆಗೆ ನೇಮಕಾತಿ ಆದೇಶ ಪಡೆಯಲು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ತರಬೇತಿ)ಯಲ್ಲಿ ಹಾಜರಾಗಲು ಆದೇಶಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.213 **ಪ್ರ. ದ. ಸಿದ್ಧಾಂತಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಸೂಚನೆ ಸಂಖ್ಯೆ: ಸಿಆಸುಇ:426:ಸಿಶಾಸೇ:2004 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

ಇದೇ ಸಂಖ್ಯೆಯ ದಿನಾಂಕ: 24.09.2004ರ ಅಧಿಸೂಚನೆಯನ್ನು ಮುಂದುವರೆಸುತ್ತಾ, ಶ್ರೀ ಲಕ್ಷ್ಮಿನಾರಾಯಣ ಶಾಖಾಧಿಕಾರಿ (ಸ್ವತಂತ್ರ ಪ್ರಭಾರ) ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ ಸಚಿವಾಲಯ, ಇವರು 58 ವರ್ಷ ವಯೋಮಿತಿಯನ್ನು ಪೂರ್ಣಗೊಂಡು ದಿನಾಂಕ: 30.06.2005ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ನಿವೃತ್ತರಾಗಲಿರುವರು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.214

**ಎಸ್. ನಳಿನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ).

**DEPARTMENT OF PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 87 SAS 2005, Bangalore, Dated: 8th February 2005**

Smt Gauri S. Trivedi, IAS (KN 86), Secretary to Government, (Land Records, LR & Registration), Revenue Department, Bangalore is transferred with immediate effect and posted until further orders as Secretary to Governor, Raj Bhavan, Bangalore by reviving the cadre post vice Sri C. S. Suranjana, IAS, transferred.

By Order and in the name of the Governor of Karnataka,

PR-215

**K. SUDHAKARA SHETTY**

Under Secretary to Government,
DP & AR (Services-1).

**HIGH COURT OF KARNATAKA**

**NOTIFICATION**

**GOB. (I)1/2005 Bangalore, Dated: 14th February 2005**

The following transfers and postings of officers of Judicial Department in the cadre of District Judges are ordered in the interest of public Service, to take effect immediately.

| Sl. No. | Name of the Officer | Present Charge | Charge to which posted |
|---|---|---|---|
| 01. | Sri N. S. Kulkarni | III Addl. District & Sessions Judge, D.K., Mangalore | As Member (Judicial) E-Committee constituted by Hon'ble Supreme Court (on Deputation) with immediate effect upto 6.1.2006. |
| 02. | Sri Rachappa A. Chinniwal | VI Addl. City Civil & Sessions Judge, Bangalore | District Judge, OOD, Leave Reserve, High Court of Karnataka, Bangalore. |

By Order of the High Court,

PR-216

**N. ANANDA**

Registrar General.

**HIGH COURT OF KARNATAKA**

**NOTIFICATION GOB. (I)349/2004 Bangalore, Dated: 14th February 2005**

In exercise of powers conferred under Section 12(2) of the Code of Criminal Procedure, the Civil Judge (Jr.Dn) and JMFC-II Court, Karwar is hereby appointed as the Addl. Chief Judicial Magistrate for Uttara Kannada District on Criminal side from after office hours on 11.2.2005 till commencement of the office hours of 14.2.2005 during the absence of the Chief Judicial Magistrate of Uttara Kannada District.

By Order of the High Court,

PR-217

**R. B. BUDIHAL**

Registrar (Judicial).

**HIGH COURT OF KARNATAKA**

**NOTIFICATION GOB. (I)28/2001 Bangalore, Dated: 11th February 2005**

In pursuance to Rule 118-A(1)(a) of K.C.S.Rs., sanction is hereby accorded for payment of cash equivalent of leave salary for Earned Leave at the credit of Sri A. M. Bennur, District Judge (Retired), Presently working as President, District Consumers Disputes Redressal Forum, Bangalore Urban District, Subject to a maximum of 240 days, on attaining the age of superannuation (60 years) as on 31.12.2004. It is certified that no Departmental Enquiry is pending against the said Officer.

By Order of the High Court,

PR-218

**N. ANANDA**

Registrar General.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಆಕುಕ: 349: ಎಂಎಂಸಿ:2004 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005

1. 1973ರ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಮತ್ತು ಪಿಂಚಣಿಗಳ ಪ್ರತಿಬಂಧನೆ) ಅಧಿನಿಯಮದ 4ನೇ ಪ್ರಕರಣದಡಿ ಈ ಕೆಳಕಂಡ ವೈದ್ಯಕೀಯ ಶಿಕ್ಷಣ ಇಲಾಖೆಯ ಬೆಂಗಳೂರು ವೈದ್ಯಕೀಯ ಕಾಲೇಜು, ಮೈಸೂರು ವೈದ್ಯಕೀಯ ಕಾಲೇಜು, ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಲ್ಲಿ ಪ್ರಸೂತಿ ಮತ್ತು ಸ್ತ್ರಿ ರೋಗಶಾಸ್ತ್ರ ಸಹಾಯಕ ಪ್ರಾಧ್ಯಾಪಕರುಗಳಿಗೆ ಅವರುಗಳ ಹೆಸರಿನ ಮುಂದೆ ನಮೂದಿಸಿರುವ ದಿನಾಂಕದಿಂದ ಜಾರಿಗೆ ಬರುವಂತೆ ಪ್ರಸೂತಿ ಮತ್ತು ಸ್ತ್ರಿ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕ ಹುದ್ದೆಗೆ ಡೀಮ್ಡ್ (deemed) ಬಡ್ತಿ ಅರ್ಹತಾದಾಯಕ ದಿನಾಂಕವನ್ನು ನಿಗದಿಗೊಳಿಸಿ ಅವರುಗಳು ಈಗ ಕಾರ್ಯನಿರತರಾದ ಹುದ್ದೆಗಳಲ್ಲಿ ಮುಂದುವರಿಸಲಾಗಿದೆ.

| ಕ್ರ. ಸಂ. | ಹೆಸರು ಹೊಂದಿರುವ ಹುದ್ದೆಯ ಪದನಾಮ ಮತ್ತು ಕಾರ್ಯನಿರತರಾದ ಕಾಲೇಜು | ಡೀಮ್ಡ್ ಬಡ್ತಿ ಅರ್ಹತಾದಾಯಕ ದಿನಾಂಕ |
|---|---|---|
| 1. | ಡಾ: ಪ್ರಭಾಕರ್ ನಾಯಕ್<br>ಪ್ರಸೂತಿ ಮತ್ತು ಸ್ತ್ರಿ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು | 30.09.1998 |
| 2. | ಡಾ: ಕೆ. ವಿ. ಗಣೇಶ್‌ರಾವ್<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | 01.01.1997 |
| 3. | ಡಾ: ಎ. ಎ. ಕಾಜೀ<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬಳ್ಳಾರಿ | 01.01.1997 |
| 4. | ಡಾ: ಹೆಚ್. ಸಿ. ಲೋಕೇಶ್‌ಚಂದ್ರ<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು | 01.01.1997 |
| 5. | ಡಾ: ಮಾನ್ವಿ ರತ್ನಮಾಲ<br>ನಿವೃತ್ತ ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಹುಬ್ಬಳ್ಳಿ | 01.01.1997 |
| 6. | ಡಾ: ಪಿ. ಇಂದಿರಾ<br>ನಿವೃತ್ತ ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಮೈಸೂರು ವೈದ್ಯಕೀಯ ಕಾಲೇಜು | 30.10.1999 |
| 7. | ಡಾ: ಎನ್. ಗೋಪಾಲ್<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | 30.10.1999 |
| 8. | ಡಾ: ಕೆ. ವಿ. ಮಾಲಿನಿ,<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ಬೆಂಗಳೂರು ವೈದ್ಯಕೀಯ ಕಾಲೇಜು | 30.10.1999 |
| 9. | ಡಾ: ಜೋಷಿ ಸುಯಜ್ಞ,<br>ಪ್ರಸೂತಿ ಮತ್ತು ಸ್ತ್ರೀ ರೋಗ ಶಾಸ್ತ್ರ ಸಹಾಯಕ ಪ್ರಾಧ್ಯಾಪಕರು, ನಿಯೋಜನೆ ಮೇಲೆ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಬಳ್ಳಾರಿ | 30.10.1999 |

2. ಮೇಲ್ಕಂಡ ಡೀಮ್ಡ್ ಬಡ್ತಿ ಅರ್ಹತಾದಾಯಕ ದಿನಾಂಕ ನಿಗದಿಕರಣವು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಬಾಕಿ ಇರುವ ಅರ್ಜಿಗಳಲ್ಲಿ ನೀಡುವ ತೀರ್ಪಿನ ಫಲಿತಾಂಶಕ್ಕೆ ಹಾಗೂ ತೀರ್ಪಿನಾನುಸಾರ ಪರಾಮಾರ್ಶಿಸುವುದಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.219

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ನಅಇ: 23 ನಯೋಸೇ:2005 ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2005

ಶ್ರೀ ಎಂ. ಎನ್. ಚಂದ್ರಶೇಖರ್, ನಗರ ಯೋಜನಾ ಸಹಾಯಕ ನಿರ್ದೇಶಕರು, ಕಾರವಾರ, ಇವರನ್ನು ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇಲ್ಲಿ ಖಾಲಿ ಇರುವ ಸಹಾಯಕ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.220

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ ಸಂಖ್ಯೆ: ಸಿಆಸುಇ:66:ಆಸೇಇ:2005 ಬೆಂಗಳೂರು, ದಿನಾಂಕ: 8ನೇ ಫೆಬ್ರವರಿ 2005

ಶ್ರೀ ಕೆ. ಆರ್. ರಾಮಕೃಷ್ಣ, ಕೆ.ಎ.ಎಸ್. (ಸೂ.ಟೈಂ.ಶ್ರೇ) ಅಧಿಕಾರಿ ಹಾಲಿ ಅಪರ ಕಾರ್ಯದರ್ಶಿ, ಕಂದಾಯ ಇಲಾಖೆ ಇವರಿಗೆ ದಿನಾಂಕ: 19.01.2005 ರಿಂದ 22.01.2005ರವರೆಗೆ ವೈಯಕ್ತಿಕ ಕಾರಣದ ಮೇರೆಗೆ ಕರ್ನಾಟಕ ನಾಗರೀಕ ಸೇವಾ ನಿಯಮ 114(3)ರಡಿಯಲ್ಲಿ ಅರ್ಧ ಸಂಬಳದ ರಜೆಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.221

**ಯು. ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2)

## ಕಂದಾಯ ಸಚಿವಾಲಯ

### ಅಧಿಸೂಚನೆ ಸಂಖ್ಯೆ:ಕಂಇ 204 ಎಎಸ್‌ಡಿ: 2004 ಬೆಂಗಳೂರು, ದಿನಾಂಕ:11ನೇ ಫೆಬ್ರವರಿ 2005

ಕಂದಾಯ ಇಲಾಖೆಯ ಈ ಕೆಳಕಂಡ ತಹಶೀಲ್ದಾರ್ ಗ್ರೇಡ್-1, ತಹಶೀಲ್ದಾರ್ ಗುಂಪು-ಬಿ ಹಾಗೂ ಕೆ.ಸಿ.ಎಸ್.ಆರ್. ನಿಯಮ 32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರುವ ಅಧಿಕಾರಿಗಳಿಗೆ 58 ವರ್ಷ ಪೂರ್ಣಗೊಳ್ಳುವ ಪ್ರಯುಕ್ತ ಅವರ ಹೆಸರಿನ ಮುಂದೆ ನಮೂದಿಸಿರುವ ದಿನಾಂಕದ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಲು ಸರ್ಕಾರವು ಅನುಮತಿ ನೀಡಿದೆ.

| ಕ್ರಮ ಸಂಖ್ಯೆ | ತಹಶೀಲ್ದಾರ್‌ರ ಹೆಸರು ಹಾಗೂ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳ | ಜನ್ಮ ದಿನಾಂಕ | ವಯೋ ನಿವೃತ್ತಿ ಹೊಂದುವ ದಿನಾಂಕ |
|---|---|---|---|
| 1. | ಶ್ರೀ ಎಸ್. ಜನಾರ್ಧನ, ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು (ಅಪರ), ಬೆಂಗಳೂರು ನಗರ ಜಿಲ್ಲೆ. | 28.04.1947 | 30.04.2005 |
| 2. | ಶ್ರೀ ವಿ. ನಾರಾಯಣಸ್ವಾಮಿ ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | 1.1.1948 | 31.12.2005 |

ಮೇಲ್ಕಂಡ ಅಧಿಸೂಚನೆಯಲ್ಲಿ ಜನ್ಮ ದಿನಾಂಕ ಹಾಗೂ ನಿವೃತ್ತಿ ದಿನಾಂಕದಲ್ಲಿ ಯಾವುದೇ ವ್ಯತ್ಯಾಸ: ಬದಲಾವಣೆ ಕಂಡು ಬಂದಲ್ಲಿ, ಸಂಬಂಧಿಸಿದ ತಹಶೀಲ್ದಾರ್‌ರುಗಳು ಅವರುಗಳ ಜನ್ಮ ದಿನಾಂಕವನ್ನು ಹೊಂದಿರುವ ಎಸ್.ಎಸ್.ಎಲ್.ಸಿ. ಹೆಚ್‌ಎಸ್‌ಸಿ ಮೂಲ ಅಂಕ ಪಟ್ಟಿಯಲ್ಲಿರುವ ಮಾಹಿತಿಯನ್ನು ಸರ್ಕಾರದ ಗಮನಕ್ಕೆ ತರುವುದು.

ಮೇಲ್ಕಂಡ ತಹಶೀಲ್ದಾರ್ ವಿರುದ್ಧ ಯಾವುದಾದರು ಇಲಾಖಾ ವಿಚಾರಣೆ ಬಾಕಿ ಇದೆಯೇ ಅಥವಾ ಹೂಡುವ ಸಂಭವವಿದೆಯೇ ಹಾಗೂ ಅವರುಗಳಿಂದ ಸರ್ಕಾರಕ್ಕೇನಾದರೂ ಬಾಕಿ ಬರಬೇಕಾಗಿದೆಯೇ ಎಂಬುದನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಪರಿಶೀಲಿಸಿ ಮಹಾಲೇಖಪಾಲರಿಗೆ ಹಾಗೂ ಸರ್ಕಾರಕ್ಕೆ ಕೂಡಲೇ ವರದಿ ಮಾಡತಕ್ಕದ್ದು.

ಯಾವ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇಲ್ಲವೋ ಅಥವಾ ಹೂಡುವ ಸಂಭವವಿಲ್ಲವೋ ಮತ್ತು ಸರ್ಕಾರಕ್ಕೆ ಯಾವುದೇ ಬಾಕಿ ಬರಬೇಕಿಲ್ಲದೇ ಇರುವ ಅಧಿಕಾರಿಗಳ ನಿವೃತ್ತಿ ವೇತನಕ್ಕೆ ಸಂಬಂಧಪಟ್ಟಂತೆ ದಾಖಲೆಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಸಿದ್ಧಪಡಿಸಿ ಮಹಾಲೇಖಪಾಲರಿಗೆ ಕಳುಹಿಸಿ ಕೂಡಲೇ ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.222

**ಎಂ. ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.(ಸೇವೆಗಳು-3).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಸಿಆಸುಇ:30:ಸೆಆಸೆ:2005 ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2005

ಶ್ರೀ ಕೆ. ಎಲ್. ನೇಗಿ, ಐ.ಎ.ಎಸ್. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು ರವರ ಪತ್ನಿ ಶ್ರೀಮತಿ ಗಾಯತ್ರಿ ನೇಗಿ ರವರು ಪ್ರಸಕ್ತ 2002-2005ರ ಬ್ಲಾಕ್ ಅವಧಿಯಲ್ಲಿ ಬೆಂಗಳೂರಿನಿಂದ ಶಿಮ್ಲಾಕ್ಕೆ ಹೋಗಿ-ಬರಲು ರಜಾ ಪ್ರಯಾಣ ರಿಯಾಯಿತಿಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಲಾಗಿದೆ.

ಸದರಿ ಉದ್ದೇಶಕ್ಕಾಗಿ ತಗಲುವ ವಾಸ್ತವಿಕ ಪ್ರಯಾಣ ವೆಚ್ಚದ ಶೇಕಡ 90ರಷ್ಟು ಹಣವನ್ನು ಅಂತಿಮ ಪ್ರಯಾಣ ಭತ್ಯೆ ಬಿಲ್ಲಿನಲ್ಲಿ ಹೊಂದಾಣಿಕೆ ಮಾಡುವ ಷರತ್ತಿಗೆ ಒಳಪಟ್ಟು ಮುಂಗಡ ಪ್ರಯಾಣ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.223

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-1)

### ಅಧಿಸೂಚನೆ ಸಂಖ್ಯೆ: ಸಿಆಸುಇ: 93: ಸೇಲೋಯು: 2004 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2005

ಶ್ರೀ ಸಿ. ಗೋವಿಂದಯ್ಯ ಮ್ಯಾನೇಜರ್, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇವರಿಗೆ ವೇತನ ಶ್ರೇಣಿ ರೂ. 7400-200-8800 -260-10880-320-13120 ರಲ್ಲಿನ ಸಹಾಯಕ ನಿಬಂಧಕರು (ಆಡಳಿತ) ಹುದ್ದೆಗೆ ಬಡ್ತಿ ನೀಡಿ ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ

ಮುಂದಿನ ಆದೇಶದವರೆಗೆ ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇಲ್ಲಿ ಖಾಲಿ ಇರುವ ಸಹಾಯಕ ನಿಬಂಧಕರು (ಆಡಳಿತ) ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.224

**ಪಿ. ಕೆ. ಬಾಬುರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವಾ ನಿಯಮಗಳು).

**ಅಧಿಸೂಚನೆ ಸಂಖ್ಯೆ: ಸಿಆಸುಇ: 92: ಸೇಲೋಯು: 2004 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2005**

ಶ್ರೀ ಬಿ. ಗಂಗಾಧರಯ್ಯ, ಹಿರಿಯ ತೀರ್ಪು ಬರಹಗಾರರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇವರಿಗೆ ವೇತನ ಶ್ರೇಣಿ ರೂ. 7400-200-8800-260-10880-320-13120 ರಲ್ಲಿನ ಗೆಜೆಟೆಡ್ ಅಸಿಸ್ಟೆಂಟ್ ಹುದ್ದೆಗೆ ಬಡ್ತಿ ನೀಡಿ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು, ಇಲ್ಲಿ ಖಾಲಿ ಇರುವ ಗೆಜೆಟೆಡ್ ಅಸಿಸ್ಟೆಂಟ್ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.225

**ಪಿ. ಕೆ. ಬಾಬುರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವಾ ನಿಯಮಗಳು).

**ಅಧಿಸೂಚನೆ ಸಂಖ್ಯೆ: ಸಿಆಸುಇ: 54: ಸೇಇಮು: 2004 ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2005**

ಅಧಿಸೂಚನೆ ಸಂಖ್ಯೆ: ಸಿಆಸುಇ 54 ಸೇಇಮು 2004 ದಿನಾಂಕ: 2.12.2004 ರಲ್ಲಿ ಪ್ರಧಾನ ಇಂಜಿನಿಯರ್ ವೃಂದಕ್ಕೆ ಕ.ನಾ.ಸೇ ನಿಯಮ 32 ರಡಿ ನೇಮಕಗೊಂಡು ಆಡಳಿತಾಧಿಕಾರಿ, ಕೃಷ್ಣಾ ಕಾಡಾ, ಭೀಮರಾಯನಗುಡಿ, ಹುದ್ದೆಗೆ ಸ್ಥಳನಿಯುಕ್ತಿ ಆದೇಶದಲ್ಲಿರುವ ಶ್ರೀ ಡಿ. ಸುಬ್ರಮಣ್ಯ ಇವರ ನೇಮಕಾತಿಯನ್ನು ಮಾರ್ಪಡಿಸಿ, ದಿನಾಂಕ: 31.1.2005 ರಂದು ಶ್ರೀ ಸಿ. ಎಸ್. ಅಂಟಿನ್ ಇವರ ವಯೋನಿವೃತ್ತಿಯಿಂದ ತೆರವಾಗಿರುವ ಪ್ರಧಾನ ಇಂಜಿನಿಯರ್, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆ ಬೆಂಗಳೂರು ಹುದ್ದೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.226

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2).

**ಅಧಿಸೂಚನೆ ಸಂಖ್ಯೆ: ಸಿಆಸುಇ: 62: ಆಸೇಇ: 2005 ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2005**

ಶ್ರೀ ಎಂ. ಅಮರನಾಥ ಸುಮತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಲಿ ವಿಶೇಷ ಭೂಸ್ವಾಧೀನಾಧಿಕಾರಿ, ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು ಇವರು, ದಿನಾಂಕ: 10.1.2005 ರಿಂದ 21.01.2005 ರವರೆಗೆ ಕಳೆದ ಅವಧಿಯನ್ನು ಈ ಕೆಳಕಂಡಂತೆ ಸಕ್ರಮಗೊಳಿಸಿ ಆದೇಶಿಸಿದೆ.

| | | |
|---|---|---|
| I | 10.01.2005 ರಿಂದ 19.01.2005 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 8 (15) (ಎಫ್)ರ ಪ್ರಕಾರ ಕಡ್ಡಾಯ ನೇಮಕಾತಿ ನಿರೀಕ್ಷಣಾ ಅವಧಿ. |
| II | 20.01.2005 ರಿಂದ 21.01.2005 ರವರೆಗೆ | ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 76ರ ಪ್ರಕಾರ ಸೇರುವಿಕೆ ಕಾಲ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.227

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2).

**ತಿದ್ದೋಲೆ ಸಂಖ್ಯೆ: ಸಿಆಸುಇ: 257: ಸಅಸೇ: 2004 (ಭಾಗ) ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2005**

ಡಾ: ಆರ್. ನರಸಿಂಹಮೂರ್ತಿ, ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಇವರನ್ನು ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಗೆ ನೇಮಿಸಿ ಹೊರಡಿಸಿರುವ ಆದೇಶ ಸಂಖ್ಯೆ: ಸಿಆಸುಇ 257 ಸಅಸೇ 2004 (ಭಾಗ), ದಿನಾಂಕ: 14.12.2004ರ ಮೊದಲ ಕಂಡಿಕೆಯ ಎರಡನೇ ಸಾಲಿನಲ್ಲಿರುವ 'ತಕ್ಷಣದಿಂದ' ಎಂಬುದಕ್ಕೆ ಬದಲಾಗಿ 'ದಿನಾಂಕ: 28.09.2004 ರಿಂದ ಪೂರ್ವಾನ್ವಯವಾಗಿ' ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.228

**ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.(ಸೇವೆಗಳು-2).

**ತಿದ್ದೋಲೆ ಸಂಖ್ಯೆ: ಸಿಆಸುಇ: 257: ಸಅಸೇ: 2004 ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2005**

ಅಧಿಸೂಚನೆ ಸಮ ಸಂಖ್ಯೆಯ ದಿನಾಂಕ: 14.12.2004ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ಇಂಧನ ಸಚಿವರ ಆಪ್ತ ಶಾಖೆಯಲ್ಲಿ ಡಾ: ಆರ್. ನರಸಿಂಹಮೂರ್ತಿ, ಕನ್ನಡ ಆಯ್ಕೆ ಶ್ರೇಣಿ ಉಪನ್ಯಾಸಕರು, ಕಾಲೇಜು ಶಿಕ್ಷಣ ಇಲಾಖೆ ಮತ್ತು ಶ್ರೀ ಕೆ. ಆರ್. ಶಿವಕುಮಾರ್, ಸಹಾಯಕ ಕಾರ್ಯಪಾಲಕ ಅಭಿಯಂತರರು, ಕಾವೇರಿ ಕೋಶ (WRDO), ನೀರಾವರಿ ಇಲಾಖೆ, ನವದೆಹಲಿ ಇವರನ್ನು ನೇಮಿಸುವ ಸಂಬಂಧದಲ್ಲಿ ಸಚಿವರ ಆಪ್ತ ಶಾಖೆಯಲ್ಲಿನ ಎರಡು ಗ್ರೂಪ್ 'ಬಿ' ಹುದ್ದೆಗಳನ್ನು ಗ್ರೂಪ್ 'ಎ'ಗೆ ಉನ್ನತೀಕರಿಸಲಾಗಿತ್ತು. ಈ ಹುದ್ದೆಗಳ ಪೈಕಿ ಡಾ: ಆರ್.ನರಸಿಂಹಮೂರ್ತಿ ರವರ

ನೇಮಕಾತಿಗೆ ಸಂಬಂಧಿಸಿದಂತೆ ಒಂದು ಗ್ರೂಪ್-'ಬಿ' ಹುದ್ದೆಯನ್ನು 'ತಕ್ಷಣದಿಂದ' ಎಂಬುದಕ್ಕೆ ಬದಲಾಗಿ 'ದಿನಾಂಕ: 28.9.2004 ರಿಂದ ಪೂರ್ವಾನ್ವಯವಾಗಿ' ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.229 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ.(ಸೇವೆಗಳು-2).

**ತಿದ್ದೋಲೆ ಸಂಖ್ಯೆ: ಸಿಆಸುಇ: 216: ಆಸೇವ: 2004 ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2005**

ಶ್ರೀ ಬಿ. ಎನ್. ಸುರೇಶ್, ಕೆ.ಎ.ಎಸ್. ಸಮೂಹ-ಎ (ಆಯ್ಕೆ ಶ್ರೇಣಿ) ಅಧಿಕಾರಿ ಇವರಿಗೆ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದಕ್ಕೆ ಬಡ್ತಿ ನೀಡಿ ಹೊರಡಿಸಿರುವ ಅಧಿಸೂಚನೆ ಸಂಖ್ಯೆ: ಸಿಆಸುಇ 216 ಆಸೇವ 2004ರ ದಿನಾಂಕವನ್ನು 15.1.2004ರ ಬದಲಿಗೆ 15.1.2005 ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.230 **ಯು. ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ.(ಸೇವೆಗಳು-2).

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ವಾಕೈ: 350: ರೇಸೇವಿ: 2004 ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2005**

ಸರ್ಕಾರಿ ಅಧಿಸೂಚನೆ ಸಂಖ್ಯೆ: ವಾಕೈ 350 ರೇಸೇವಿ 2004, ದಿನಾಂಕ: 25.01.2005ರ ಅಧಿಸೂಚನೆಯ ಮೊದಲನೇ ಸಾಲಿನಲ್ಲಿರುವ ಅಧಿಕಾರಿಯ ಹೆಸರು "ಶ್ರೀ ಕೆ. ಎನ್. ಕೃಷ್ಣಪ್ಪ" ಎಂಬುವ ಬದಲಾಗಿ "ಶ್ರೀ ಎನ್. ಕೆ. ಕೃಷ್ಣಪ್ಪ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.231 **ಬಿ. ದೇವಿಕ**

ಸರ್ಕಾರದ ಅಧೀನ ಕಾರ್ಯದರ್ಶಿ,(ರೇಷ್ಮೆ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಇಂಧನ ಸಚಿವಾಲಯ

**ತಿದ್ದುಪಡಿ ಸಂಖ್ಯೆ:ಇಂಇ 175 ಇಇಬಿ 2003 (ಭಾ) ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2005**

ಅಧಿಸೂಚನೆ ಸಂಖ್ಯೆ: ಇಂಇ 175 ಇಇಬಿ 2003 ದಿನಾಂಕ: 14.7.2004ರ ಕ್ರಮ ಸಂಖ್ಯೆ: 11ರಲ್ಲಿ ನಮೂದಿಸಲಾಗಿರುವ "ಶ್ರೀ ಕೆ.ಎಂ.ಮೊನ್ನಪ್ಪ, ಐ.ಎ.ಎಸ್." ಎಂಬುದರ ಬದಲಾಗಿ "ಶ್ರೀ ಎ. ಕೆ. ಮೊನ್ನಪ್ಪ, ಐ.ಎ.ಎಸ್." ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.232 **ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಕಂಇ 151 ಮುಸೇವಿ 2004 ಬೆಂಗಳೂರು, ದಿನಾಂಕ: 28ನೇ ಜನವರಿ 2005**

ಸಂಖ್ಯೆ: ಕಂಇ 151 ಮುಸೇವಿ 2004 ದಿನಾಂಕ: 22.01.2005ರ ಅಧಿಸೂಚನೆಯಲ್ಲಿ ಧಾರ್ಮಿಕದತ್ತಿ ಇಲಾಖೆಯ ಗ್ರೂಪ್ ಬಿ ಅಧಿಕಾರಿಗಳಿಗೆ ಗ್ರೂಪ್ ಎ ಹುದ್ದೆಗೆ ಪದೋನ್ನತಿ ನೀಡಿ ಸ್ಥಳ ನಿಯುಕ್ತಿ ಮಾಡಿದ್ದನ್ನು ಭಾಗಶಃ ಮಾರ್ಪಾಡು ಮಾಡಿ ಈ ಕೆಳಗಿನಂತೆ ಸ್ಥಳ ನಿಯುಕ್ತಿ ಮಾಡಲಾಗಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ಬಡ್ತಿಯ ಮೇಲೆ ನೇಮಿಸಲಾದ ಸ್ಥಳ |
|---|---|---|
| 1. | ಶ್ರೀ ಹೆಚ್. ಎಂ. ಕಾಳಿ, ಕಾರ್ಯನಿರ್ವಾಹಕ ಅಧಿಕಾರಿ ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ನಂಜನಗೂಡು. | ಕಾರ್ಯನಿರ್ವಾಹಕ ಅಧಿಕಾರಿ, ಶ್ರೀ ಮೂಕಾಂಬಿಕ ದೇವಸ್ಥಾನ ಕೊಲ್ಲೂರು, ಕುಂದಾಪುರ ತಾಲ್ಲೂಕು ಉಡುಪಿ ಜಿಲ್ಲೆ. |
| 2. | ಶ್ರೀಮತಿ ಎಸ್. ಟಿ. ಸುಧಾ ಮುಜರಾಯಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಕಾರ್ಯನಿರ್ವಾಹಕ ಅಧಿಕಾರಿಗಳು, ಶ್ರೀ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನ, ನಂಜನಗೂಡು. |

ಮೇಲ್ಕಂಡ ಅಧಿಕಾರಿಗಳು ಅವರು ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಿಂದ ಬಿಡುಗಡೆಹೊಂದಿ ಸ್ಥಳ ನಿಯುಕ್ತಿಗೊಂಡ ಹೊಸ ಹುದ್ದೆಗಳಿಗೆ ಕಾರ್ಯ ವರದಿ ಮಾಡಿಕೊಂಡು ಸರ್ಕಾರಕ್ಕೆ ಮಾಹಿತಿ ಸಲ್ಲಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.233 **ರಮೇಶ್ ಕೆ. ಜಾಗೀರ್‌ದಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ).

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ನಅಇ 141 ನಯೋಸೇ 04(ಭಾಗ) ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2005**

ದಿನಾಂಕ: 03.02.2005ರ ಅಧಿಸೂಚನೆ ಸಂಖ್ಯೆ: ನಅಇ 141 ನಯೋಸೇ 2004 ರ ಕ್ರಮ ಸಂಖ್ಯೆ:7 ರಲ್ಲಿ ಶ್ರೀ ಬಿ. ಆರ್. ನಟರಾಜಶೆಟ್ಟಿ, ನಗರ ಯೋಜನಾ ಪರ್ಯವೇಕ್ಷಕರು, ಇವರಿಗೆ ಮುಂಬಡ್ತಿ ನೀಡಿ ಕಿರಿಯ ನಗರ ಯೋಜಕರು, ನಗರ ಯೋಜನಾ ನಿರ್ದೇಶಕರ ಕಛೇರಿ, ಬೆಂಗಳೂರು ಇಲ್ಲಿನ ಖಾಲಿ ಹುದ್ದೆಗೆ ನೇಮಿಸಿರುವ ಆದೇಶವನ್ನು ಭಾಗಶಃ ಮಾರ್ಪಡಿಸಿ, ಸದರಿಯವರನ್ನು ನಿಯೋಜನೆಯ ಮೇಲೆ ಕಿರಿಯ ನಗರ ಯೋಜಕರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇಲ್ಲಿಯ ಖಾಲಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.235 **ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

**ಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಪಿಡಿ 9 ಎಸ್‌ಪಿಬಿ 2005, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2005**

ಸರ್ಕಾರಿ ಪತ್ರ ಸಂಖ್ಯೆ: ಸಂವ್ಯಶಾಇ 4 ಭಾನಿವಿ 2005, ದಿನಾಂಕ: 29.1.2005 ರಲ್ಲಿ ಶ್ರೀ ಹೆಚ್.ಎನ್. ಸೋಮಶೇಖರಪ್ಪ, ಭಾಷಾಂತರಕಾರರು, ಭಾಷಾಂತರ ನಿರ್ದೇಶನಾಲಯ, ಬೆಂಗಳೂರು ಇವರ ಸೇವೆಯನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯು ದಿನಾಂಕ: 1.2.2005 ರಿಂದ ಜಾರಿಗೆ ಬರುವಂತೆ ನಿಯೋಜನೆ ಮೇಲೆ ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ ಇವರ ಆಪ್ತ ಕಾರ್ಯದರ್ಶಿಯಾಗಿ ನೇಮಿಸಿಕೊಳ್ಳಲು ರಾಜ್ಯ ಯೋಜನಾ ಮಂಡಳಿಯ ಸುಪರ್ದಿಗೆ ನೀಡಿರುವುದರಿಂದ ಸದರಿಯವರನ್ನು ದಿನಾಂಕ: 1.2.2005 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮಾನ್ಯ ಉಪಾಧ್ಯಕ್ಷರು, ರಾಜ್ಯ ಯೋಜನಾ ಮಂಡಳಿ ಇವರ ಆಪ್ತ ಕಾರ್ಯದರ್ಶಿಯನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 236

**ಬಿ.ಎನ್. ಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ-3,

ಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**HIGH COURT OF KARNATAKA, BANGALORE**

**NOTIFICATION**

**No. RPS 171/1994(HCE), Dated 11th February 2005**

In exercise of the powers conferred on the Hon'ble Chief Justice under Rule 4(a) of the Karnataka High Court Administrative Expenditure Rules 1989, the Hon'ble Chief Justice is pleased to continue the following posts which were created vide this Officer Notification of even number dated 3.2.1999 and continued for a period of two years w.e.f. 3.2.2001 vide this Office Notification of even number dated 7.2.2001 and again continued for a period of two years w.e.f. 3.2.2003 vide this Office Notification of even number dated 14.1.2003 are continued for a further period of two years on temporary basis w.e.f. 3.2.2005.

| | | |
|---|---|---|
| 1. Section Officer | ... | 08 posts |
| 2. Senior Assistant | ... | 26 posts |
| 3. Assistant Court Officer | ... | 03 posts |
| 4. Senior Judgement Writer | ... | 04 posts |
| 5. Judgement Writer | ... | 28 posts |

By Order of Hon'ble the Chief Justice,

PR-234

**R.B. Budihal**

Registrar (Judicial)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಕುಕ 44 ಐಎಂಎಂ 2005, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2005**

ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 68 ಎಂಎಸ್‌ಎಸ್ 2005, ದಿನಾಂಕ: 24.1.2005 ರನ್ವಯ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಈ ಹುದ್ದೆಯ ಅಧಿಕ ಪ್ರಭಾರದಲ್ಲಿರುವ ಡಾ: ಪಾರ್ವತಿ ವಿ. ನಾಗರಾಳ್ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಔಷಧ ನಿಯಂತ್ರಣ ಇಲಾಖೆಯ ಔಷಧ ನಿಯಂತ್ರಕರ ಹುದ್ದೆಯ ಅಧಿಕ ಪ್ರಭಾರದಲ್ಲಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 237

**ಚೋಮಾನಾಯಕ್. ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 43 ಕಾಬಾಸೇ 2003, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2005**

ಶ್ರೀ ಜಿ.ಪಿ. ರಾಜಗೋಪಾಲ್, ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು, ಇವರಿಗೆ ಕರ್ನಾಟಕ ರಾಜ್ಯ ನಾಗರೀಕ ಸೇವಾ (ಶಿಸ್ತು, ವೇತನ ಮತ್ತು ಪಿಂಚಣಿ ಕ್ರಮಬದ್ಧತೆ) ನಿಯಮಾವಳಿ, 1978ರ ನಿಯಮ (2) ಉಪ ನಿಯಮ (3)ರ ಮೇರೆಗೆ ದಿನಾಂಕ: 16.7.2001 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕಾರ್ಖಾನೆಗಳ ಉಪ ನಿರ್ದೇಶಕರು, ಬೆಂಗಳೂರು, ಹುದ್ದೆಗೆ ನಿಯತ ಪದೋನ್ನತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 238

**ವಿಮಲಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ (ಕಾರ್ಖಾನೆ ಮತ್ತು ಬಾಯ್ಲರುಗಳು).

